ಡಾ॥ ಬಿ. ವ್ಹಿ. ಶಿರೂರ

# ಕೊಪಣನಗರ : ಒಂದು ಐತಿಹಾಸಿಕ ಕೇಂದ್ರ

ಹನಿಹನಿ ಕೂಡಿ ಹಳ್ಳವಾಗುವಂತೆ, ಗ್ರಾಮಗ್ರಾಮಗಳ ಚರಿತ್ರೆಯೆಲ್ಲ ಸೇರಿ ನಾಡ ಇತಿಹಾಸವಾಗುತ್ತದೆ. ಚರಿತ್ರಾತ್ಮಕ ವ್ಯಕ್ತಿಗಳನ್ನು ರೂಪಿಸುವಲ್ಲಿ, ಅವರಿಗೆ ತಕ್ಕ ಪರಿಸರವನ್ನು ಕಲ್ಪಿಸುವಲ್ಲಿ ಈ ಗ್ರಾಮಗಳು ಪ್ರಮುಖ ಪಾತ್ರ ವಹಿಸುತ್ತವೆ. ಕನ್ನಡನಾಡಿನ ಇತಿಹಾಸದ ಪುಟಗಳನ್ನು ತಿರುವಿದಾಗ ಇಂತಹ ಹಲವು ಹತ್ತು ಗ್ರಾಮಗಳ ಉಲ್ಲೇಖ ದೊರೆಯುತ್ತವೆ. ಅವುಗಳಲ್ಲಿ ಪ್ರಮುಖವಾದುದು ಕೊಪಣನಗರ ಎಂದು ಪ್ರಸಿದ್ಧಿ ಪಡೆದಿದ್ದ ಈಗಿನ ಕೊಪ್ಪಳ. ಪ್ರಾಚೀನ ಕಾಲದಲ್ಲಿ ಬೌದ್ಧ, ಜೈನಧರ್ಮಗಳ ವಾಸಸ್ಥಳವಾಗಿದ್ದು, ತರುವಾಯ ಶೈವ, ವೀರಶೈವ ಧರ್ಮಗಳಿಗೆ ಭೀಮಬಲವಾಗಿ ನಿಂತ ಈ ಸ್ಥಳ ಕ್ರಿ. ಪೂ. ೩ನೆಯ ಶತಮಾನದಷ್ಟು ಪ್ರಾಚೀನ. ಆಗಾಗ ರಾಜಕೀಯ ಮಹತಿಯನ್ನು ಪಡೆದು ರಾಜರ ಮಹತ್ವಾಕಾಂಕ್ಷೆಯ ತುಳಿತಕ್ಕೂ ಸಿಕ್ಕಿ, ಹಲವಾರು ಏಳುಬೀಳುಗಳನ್ನೂ ಕಂಡಿದೆ ಈ ಸ್ಥಳ.

ರಾಜಕೀಯವಾಗಿ 'ದಕ್ಷಿಣದ ಮಹಾದ್ವಾರ' ಎಂದು ಪ್ರಸಿದ್ಧಿ ಪಡೆದಿದ್ದ ಈ ಸ್ಥಳ ರಾಯಚೂರು ಜಿಲ್ಲೆಯ ಪ್ರಮುಖ ಪಟ್ಟಣ. ಪುರಾಣಕಾಲದಿಂದಲೂ ಹಲವಾರು ವದಂತಿಗಳನ್ನು ತನ್ನ ಚರಿತ್ರೆಯೊಂದಿಗೆ ಹೊತ್ತು ನಿಂತಿದೆ. ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯಲು ತಪಸ್ಸು ಮಾಡಿದ ಇಂದ್ರಕೀಲಪರ್ವತ ಇಲ್ಲಿಯ ಪರ್ವತ ಸಾಲುಗಳಲ್ಲಿ ಒಂದು. ಅವನು ಮಳಲಲಿಂಗವನ್ನು ಪೂಜಿಸಲು ಈಶ್ವರನು ಪ್ರತ್ಯಕ್ಷವಾದ ಸ್ಥಳ ಇಂದಿನ ಮಳೆಯ ಮಲ್ಲೇಶ್ವರ. ಪಾಂಡವರು ಇಲ್ಲಿ ಬೀಡಾರ ಮಾಡಿದ್ದರು ಎಂದು, 'ಪಾಂಡವರ ವಠಾರ' ಎಂಬ ಸ್ಥಳವನ್ನು ಇಂದಿಗೂ ತೋರಲಾಗುತ್ತಿದೆ.

ಪುರಾಣಗಳ ಕಲ್ಪನಾಲೋಕ ಬಿಟ್ಟು ಐತಿಹ್ಯಗಳ ನಿಜಲೋಕಕ್ಕೆ ಬಂದರೆ, ಇಲ್ಲಿ ದೊರೆತ ತಲೆಬುರುಡೆ, ಮಣ್ಣಿನ ಪಾತ್ರೆ, ಆಯುಧ ವಿಶೇಷ ಮೊದಲಾದುವು ಈ ಸ್ಥಳ ಪ್ರಾಚೀನ ಕಾಲದಿಂದ ಮಾನವರ ವಾಸಸ್ಥಳವಾಗಿತ್ತೆಂಬುದಕ್ಕೆ ಸಾಕ್ಷಿ ಹೇಳುತ್ತಿವೆ. ಇಲ್ಲಿಯ ಸುಪ್ರಸಿದ್ಧ ಗವಿಸಿದ್ಧೇಶ್ವರ ಮಠದ ಮೇಲಿನ ಗುಹೆಗಳಲ್ಲಿ ಶಿಲಾಯುಗದ ಆದಿಮಾನವನ ವರ್ಣರಂಜಿತ ಚಿತ್ರಗಳೂ ದೊರೆತಿವೆ. ಮೋರೇರ ಅಂಗಡಿ, ಮೋರೇರ ಅಗಸಿ, ಮಿಂಚರ ಬಂಡೆಬಯಲು ಮೊದಲಾದವು ಈ ಸ್ಥಳದ ಇತಿಹಾಸವನ್ನು ಕ್ರಿಸ್ತಪೂರ್ವದತ್ತ ಒಯ್ಯುತ್ತಿವೆ.

ಕರ್ನಾಟಕದಲ್ಲಿ ದೊರೆಯುವ ಮೊಟ್ಟಮೊದಲ ಶಾಸನಗಳು 'ದೇವನಾಂಪ್ರಿಯ' 'ಪ್ರಿಯದರ್ಶಿ' ಎಂದು ಪ್ರಸಿದ್ಧಿ ಪಡೆದ ಅಶೋಕನ ಧರ್ಮಶಾಸನಗಳು. ಅವುಗಳಲ್ಲಿ ಎರಡು ಕೊಪ್ಪಳದಲ್ಲಿಯೇ ಇರುವುದು, ಅಂದಿನ ಕಾಲದಲ್ಲಿ ಈ ಸ್ಥಳ ಪಡೆದಿದ್ದ ಪ್ರಸಿದ್ಧಿಯನ್ನೂ ಮಹತಿಯನ್ನೂ ಸಾರುತ್ತಿವೆ; ಕನ್ನಡ ನೆಲದ ಮೇಲೆ ಆಳಿಕೆಯನ್ನು ನಡೆಸಿದ ಪ್ರಥಮ ಪ್ರಭು ಅಶೋಕ ಎಂಬುದನ್ನು ಸಾರುತ್ತಿವೆ.

ಮೌರ್ಯರ ತರುವಾಯ ಈ ನಾಡು ಶಾತವಾಹನರ

ಆಳ್ವಿಕೆಗೆ ಒಳಪಟ್ಟಿತು. ಇವರು ಈ ನಾಡನ್ನು ಸುಮಾರು ೫೫೦ ವರ್ಷಗಳ ಕಾಲ ಆಳಿದರು. ಎರಡು ಅಶ್ವಮೇಧ ಯಾಗಗಳನ್ನೂ ಒಂದು ರಾಜಸೂಯಯಾಗವನ್ನೂ ಮಾಡಿದ ಈ ವಂಶದ ಕನ್ನ ಅಥವಾ ಕೃಷ್ಣ ಮಹಾರಾಷ್ಟ್ರದಿಂದ ಪೂರ್ವತೀರದ ಕಳಿಂಗದವರೆಗೆ ಆಳಿದನೆಂದು ತಿಳಿದು ಬರುತ್ತದೆ. ಕೊಪ್ಪಳ ತಾಲ್ಲೂಕಿನ ಚಿಕ್ಕಸಿಂದೋಗಿಯಲ್ಲಿ ಈ ವಂಶಕ್ಕೆ ಸಂಬಂಧಿಸಿದ ೫೫೩೪ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳ ರಾಶಿ ದೊರೆತಿರುವುದನ್ನೂ ಇಲ್ಲಿ ಸ್ಮರಿಸಬಹುದಾಗಿದೆ. ಕದಂಬ ವಂಶದ ಸ್ಥಾಪಕ ಮಯೂರವರ್ಮನ ಶಾಸನದಲ್ಲಿ 'ಕುಪಣಾಚಮ' ಎಂಬ ಹೆಸರಿನಲ್ಲಿ ಕೊಪ್ಪಳದ ಉಲ್ಲೇಖವಿರುವುದನ್ನೂ ಕಾಣಬಹುದಾಗಿದೆ.[1]

ಕರ್ನಾಟಕದ ಇತಿಹಾಸಕ್ಕೆ ಒಂದು ನಿರ್ದಿಷ್ಟ ಸ್ವರೂಪ ಕೊಟ್ಟ ಅರಸರಲ್ಲಿ ಚಾಲುಕ್ಯರು ಪ್ರಮುಖರು. ಅವರಲ್ಲಿ ಪ್ರಸಿದ್ಧ ದೊರೆ ಶಕಪುರುಷ ೨ನೆಯ ಪುಲಕೇಶಿ. ಈತನ ಕಾಲದಲ್ಲಿ ಪ್ರವಾಸಕ್ಕೆ ಬಂದ ಚೀನಾದೇಶದ ಪ್ರವಾಸಿ ಹುವೆನ್‌ತ್ಸಾಂಗ, ಕನ್ನಡನಾಡಿನ ಪ್ರಸಿದ್ಧ ಸ್ಥಳಗಳನ್ನು ಹೆಸರಿಸುವಾಗ ಈ ಸ್ಥಳವನ್ನು 'ಕೊಂಕಣ ಪುಲೋವು' ಎಂದು ಉಲ್ಲೇಖಿಸಿದ್ದಾನೆ. ಅಶೋಕನ ತರುವಾಯ ಮೌನ ಧರಿಸಿದ್ದ ಇಲ್ಲಿಯ ಶಾಸನ ಸಂಪತ್ತು ತನ್ನ ಮೌನದ ಮುದ್ರೆಯೊಡೆಯುತ್ತಿರುವುದು ಕೊಪ್ಪಳಕ್ಕೆ ನಾಲ್ಕು ಮೈಲಿ ದೂರದಲ್ಲಿರುವ ಹಲಗೇರಿ ಶಾಸನದಿಂದ. ಇದು ಬಾದಾಮಿ ಚಾಲುಕ್ಯ ಅರಸು ವಿಜಯಾದಿತ್ಯ ಈ ಸ್ಥಳದೊಂದಿಗೆ ಹೊಂದಿದ್ದ ಸಂಬಂಧ ಸಾರುತ್ತಿದೆ. ಕ್ರಿ. ಶ. ೯೬೮ರ ಕುಕನೂರ ತಾಮ್ರಶಾಸನ ಗಂಗ ಅರಸು ಮಾರಸಿಂಹನನ್ನು ಉಲ್ಲೇಖಿಸುತ್ತದೆ. ಇಲ್ಲಿ ಕೊಪ್ಪಳದ ನೇರ ಪ್ರಸ್ತಾಪ ಇಲ್ಲದಿದ್ದರೂ ಕುಕನೂರು ಕೊಪ್ಪಳಕ್ಕೆ ಅತಿ ಸಮೀಪದಲ್ಲಿರುವುದರಿಂದ ಈ ಎಲ್ಲ ಭಾಗ ಗಂಗರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದಾಗಿದೆ.

ಚಾಲುಕ್ಯರ ತರುವಾಯ ಕರ್ನಾಟಕ-ಸಾಮ್ರಾಜ್ಯದ ವೈಭವವನ್ನು ಪರಾಕಾಷ್ಠೆಗೆ ಒಯ್ದವರು ರಾಷ್ಟ್ರಕೂಟರು. ಈ ವಂಶದ ಅರಸರಲ್ಲಿ ೧ನೆಯ ಕೃಷ್ಣ, ಇಮ್ಮಡಿ ಗೋವಿಂದ, ಧ್ರುವ, ಮುಮ್ಮಡಿ ಗೋವಿಂದ ಮೊದಲಾದವರು ಈ ನಾಡಿನಲ್ಲಿ ಆಡಳಿತ ನಡೆಸಿದರು. ಇವರಲ್ಲಿ ಈ ನಾಡಕೀರ್ತಿ ಇಂದಿಗೂ ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ ಕೀರ್ತಿ ಅಮೋಘವರ್ಷ ನೃಪತುಂಗನ ಆಶ್ರಯದಲ್ಲಿದ್ದ ಶ್ರೀವಿಜಯ ರಚಿಸಿದ ಕವಿರಾಜಮಾರ್ಗದ್ದು. ಅಲ್ಲಿ ಈ ನಾಡಿನ ಮಹತಿಯನ್ನು– "ಕಾವೇರಿಯಿಂದಮಾ ಗೋ। ದಾವರಿ ವರಮಿರ್ದ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸು। ಧಾವಳಯ ವಿಲೀನ ವಿಶದ ವಿಷಯ ವಿಶೇಷಂ"(೧-೩೬), "ಅದಱೊಳಗಂ ಕಿಸುವೊೞಲಾ। ವಿದಿತ ಮಹಾಕೊಪಣ ನಗರದಾ ಪುಲಿಗೆಱೆಯಾ ಸದಭಿಸ್ತುತಮಪ್ಪೊಂಕ್ಕುಂ। ದದ ನಡುವಣ ನಾಡೆ ನಾಡೆ ಕನ್ನಡ ತಿರುಳ್" (೧-೩೬). ಕಾವೇರಿಯಿಂದ ಗೋದಾವರಿಯುವರೆಗೆ ಕನ್ನಡ ನಾಡು ವ್ಯಾಪಿಸಿದೆ. ಇಲ್ಲಿರುವ ಜನಪದವು ಜಗತ್ತಿನ ಸುಪ್ರಸಿದ್ಧ ವಿಷಯುಗಳಿಗೆ ಮಿಗಿಲು. ಆ ಜನಪದದೊಳಗೆ ಕಿಸುವೊಳಲು (ಇಂದಿನ ಪಟ್ಟದಕಲ್ಲು), ಕೊಪಣನಗರ (ಇಂದಿನ ಕೊಪ್ಪಳ), ಪುಲಿಗೆರೆ (ಇಂದಿನ ಲಕ್ಷ್ಮೇಶ್ವರ), ಒಕ್ಕುಂದ (ಇಂದಿನ ಬೆಳಗಾಂವಿ ಜಿಲ್ಲೆಯ ಒಕ್ಕುಂದ) ಈ ನಾಲ್ಕು ಊರುಗಳು 'ಕನ್ನಡ ನುಡಿದೇವಿಯ ಚಿತ್ರಕ್ಕೆ ನಾಲ್ಕೂ ದಿಕ್ಕುಗಳಲ್ಲಿ ಹಚ್ಚಿಟ್ಟ ನಂದಾದೀವಿಗೆ'ಗಳಂತೆ ಭಾಸವಾಗುತ್ತಿವೆ. ರಾಷ್ಟ್ರಕೂಟರ ರಾಜಕೀಯ ಪ್ರಭಾವ ಪರಮಾವಧಿಯನ್ನು ಮುಟ್ಟಿದ್ದು ೩ನೆಯ ಕೃಷ್ಣನ ಕಾಲದಲ್ಲಿ. ಇವನ ಆಳ್ವಿಕೆಯನ್ನುಸುರುವ ಕ್ರಿ. ಶ. ಸು. ೯೬೪ರ ಉಪ್ಪಿನ ಬೆಟಗೇರಿ ಶಾಸನವು, ಅವನ ಮಹಾಸಾಮಂತಾಧಿಪತಿಯಾದ ಶಂಕರಗಂಡನು ಕೊಪ್ಪಳದಲ್ಲಿ ಜಿನಾಲಯ ಕಟ್ಟಿಸಿದನೆಂತಲೂ ಅದು ಅವನ 'ಜಯಧೀರ'ಯೆಂಬ ಬಿರುದಿನಿಂದ ಪ್ರಸಿದ್ಧಿ ಪಡೆಯಿತೆಂತಲೂ ಹೇಳಿದೆ. ಶಂಕರಗಂಡ ಆ ಕಾಲದಲ್ಲಿ ಬಹು ಪ್ರಸಿದ್ಧನಾಗಿದ್ದ ವ್ಯಕ್ತಿಯಾಗಿದ್ದನು ಮತ್ತು ರನ್ನನಿಂದ 'ಜೈನಮತದ ಪೋಷಕ'ನೆಂದು ಕೀರ್ತಿತನಾಗಿದ್ದನು.

ರಾಷ್ಟ್ರಕೂಟರ ತರುವಾಯ ಕರ್ನಾಟಕದ ರಾಜ್ಯಸೂತ್ರವನ್ನು ಪಡೆದವರು ಕಲ್ಯಾಣದ ಚಾಲುಕ್ಯರು. ಅವರಲ್ಲಿ ಇಮ್ಮಡಿ ತೈಲಪ, ೫ನೆಯ ವಿಕ್ರಮಾದಿತ್ಯ, ೨ನೆಯ ಜಯಸಿಂಹ, ೬ನೆಯ ವಿಕ್ರಮಾದಿತ್ಯ ಮೊದಲಾದವರು ಪ್ರಮುಖರು. ೬ನೆಯ ವಿಕ್ರಮಾದಿತ್ಯನ ಕಾಲದಲ್ಲಿ ಅತ್ಯಂತ ಪ್ರಸಿದ್ಧಿ ಪಡೆದ ಯಲಬುರ್ಗಿಯ ಸಿಂದ ಮನೆ

1 ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೬೯–೨

ತನ, ಚಾಲುಕ್ಯ ಸಾಮ್ರಾಜ್ಯವನ್ನು ಉಳಿಸಲು, ಬೆಳೆಸಲು ಶಕ್ತಿಮೀರಿ ಪ್ರಯತ್ನಿಸಿತು. ಆ ವಂಶದ ದೊರೆ ೨ನೆಯ ಆಚರಸ ಹೊಯ್ಸಳ ವಿಷ್ಣುವರ್ಧನನನ್ನು ದೋರಸಮುದ್ರ ದವರೆಗೆ ಅಟ್ಟಿಕೊಂಡು ಹೋದ ಬಗ್ಗೆ ಆಧಾರ ದೊರೆಯುತ್ತವೆ.

ಚಾಲುಕ್ಯ ಸಾಮ್ರಾಜ್ಯದ ವಾರಸುದಾರರಾಗಿ ಬಂದ ಕಳಚೂರ್ಯರಲ್ಲಿ ಬಿಜ್ಜಳನನ್ನು ಕುಕನೂರ ಶಾಸನ ಮನ ದುಂಬಿ ಬಣ್ಣಿಸಿದೆ. ಇಲ್ಲಿಯ ಇನ್ನೆರಡು ಶಾಸನಗಳು ರಾಯ ಮುರಾರಿದೇವ ಮತ್ತು ಸಂಕಮದೇವರು ಕೊಪ್ಪಳಕ್ಕೆ ೩ ಮೈಲಿ ಅಂತರದಲ್ಲಿರುವ ಮೊದೆಗನೂರಿನಲ್ಲಿ ಸುಖ ಸಂಕಥಾವಿನೋದದಿಂದ ರಾಜ್ಯಗೆಯ್ಯುತ್ತಿದ್ದನೆಂದು ಹೇಳಿವೆ.

ಕಲೆ ಮತ್ತು ಸಂಸ್ಕೃತಿಗಳ ಸಂಗಮವಾಗಿದ್ದ ಹೊಯ್ಸಳ ಮನೆತನವೂ ಈ ಸ್ಥಳದೊಂದಿಗೆ ಗಾಢ ಸಂಬಂಧ ಪಡೆದಿದ್ದ ಬಗ್ಗೆ ಆಧಾರ ದೊರೆಯುತ್ತಿವೆ. ವಿಷ್ಣುವರ್ಧನನ ಕಾಲದ ಜೈನಧರ್ಮದ ಎರಡು ಕಣ್ಣುಗಳಂತಿದ್ದ ಶಾಂತಲೆ ಗಂಗರಾಜರಲ್ಲಿ, ಶಾಂತಲೆ ಶ್ರವಣಬೆಳ್ಗೊಳದಂತೆ ಇಲ್ಲಿಯೂ ಒಂದು ಜಿನಾಲಯ ನಿರ್ಮಿಸಿದಳು. ಗಂಗರಾಜನು ಗಂಗವಾಡಿ ತೊಂಬತ್ತಾರು ಸಾಸಿರಕೆಲ್ಲ ಕೊಪಣವನ್ನು ಆದರ್ಶವಾಗಿಟ್ಟುಕೊಂಡಿದ್ದನು.[2] ಅವನ ಅಣ್ಣನ ಮಗ ಏಚಿರಾಜ ಕೊಪಣ ಆದಿತೀರ್ಥದಲ್ಲಿ ಮತ್ತು ಬೆಳ್ಗೊಳದಲ್ಲಿ ಧರಿತ್ರಿಯಲ್ಲಿ ಕೊಂಡು ಕೊನೆದಾಡುವಂತೆ ಜಿನೇಂದ್ರ ಭವನಂಗಳನ್ನು ಮಾಡಿಸಿದನು.[3] ಅಲ್ಲದೆ ಏಚಿರಾಜನು ಬೆಳಗವತ್ತಿನಾಡನ್ನು ನಿರ್ಮಿಸುವಲ್ಲಿಯೂ ಕೊಪ್ಪಳವನ್ನೇ ಆದರ್ಶವಾಗಿಟ್ಟುಕೊಂಡಿದ್ದನು. ಹೊಯ್ಸಳ ನಾರಸಿಂಹನ ಮಂತ್ರಿ ಹುಳ್ಳರಾಜ ಕೊಪ್ಪಳದಲ್ಲಿಯ ಮುನಿಸಂಘಕ್ಕೆ ಸುವರ್ಣದಾನವನ್ನಿತ್ತು ಪುಣ್ಯಪುಂಜೈಕ್ಯಧಾಮನೆನಿಸಿದನು.[4]

ಹೊಯ್ಸಳ ಅರಸರ ಆಳಿಗಾಲದಷ್ಟೊತ್ತಿಗೆ ಮುಸಲ್ಮಾನರ ದಾಳಿ ಆರಂಭವಾಯಿತು. ಅದನ್ನು ಎದುರಿಸುವಲ್ಲಿ ಇಡೀ ನಾಡೆಲ್ಲ ಕೈಸೋತು ನಿಂತಾಗ ಆನೆಗುಂದಿಯ ಕಂಪಿಲ ಮತ್ತು ಅವನ ಮಗ ಕುಮಾರರಾಮರು ಧೈರ್ಯವಾಗಿ ನಿಂತುದು ಐತಿಹಾಸಿಕ ಮಹತ್ವದ ಘಟನೆ. ನೇಮಿಖಾನ-ತೊರೆಗಲ್ಲು, ಬದಾಮಿ, ಮುದಿಗಲ್ಲು, ಕೊಪಣದ ತೆರಹಿನ ರಾಜ್ಯವೆಲ್ಲವನ್ನು ಇರಿದು ಕೆಡಿಸುತ್ತ ಬಂದನೆಂದೂ ಕುಮಾರರಾಮ ಅವನನ್ನು ಸೋಲಿಸಿ ಅಲ್ಲೆಲ್ಲ ತನ್ನ ಮಾಂಡಲಿಕರನ್ನು ನೇಮಿಸಿದನೆಂದೂ ಕುಮಾರರಾಮನ ಸಾಂಗತ್ಯ ಹೇಳಿದೆ (೧೯-೪೮). ಅದು ಮುಂದುವರಿದು, ಕೊಪಣವೊಂದು ಬಲಾಢ್ಯ ದುರ್ಗವೆಂದೂ ಅಲ್ಲಿ ತಿಮ್ಮರಾಜನೆಂಬುವನು ಕಂಪಿಲನ ಮಾಂಡಲಿಕನಾಗಿದ್ದನೆಂದೂ ಬಣ್ಣಿಸಿದೆ. ಕಮ್ಮಟದುರ್ಗದ ಶೂಲದಹಬ್ಬದಲ್ಲಿ ಕೊಪಣದ ತಿಮ್ಮರಾಜನ ಕುವರನೂ ಭಾಗವಹಿಸಿದ್ದನಂತೆ. ಇವೆಲ್ಲವುಗಳಿಂದ ಕುಮಾರರಾಮನ ಕಾರ್ಯಚಟುವಟಿಕೆಗಳ ಆಡುಂಬೊಲ ಈ ಕೊಪಣ ನಗರವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.

ಮುಂದೆ ಈ ಪಟ್ಟಣ ಒಮ್ಮೆ ಮುಸಲ್ಮಾನರ ಕೈಗೂ ಒಮ್ಮೆ ವಿಜಯನಗರದರಸರ ಕೈಗೂ ಹಸ್ತಾಂತರಗೊಳ್ಳುತ್ತ ಬಂದ ಬಗ್ಗೆ ಆಧಾರ ದೊರೆಯುತ್ತದೆ. ವಿಜಯನಗರದರಸರು ಹರಿಹರ ಭಕ್ತ ಸಮೂಹದೊಂದಿಗೆ ಸಿಂಹನಂದ್ಯಾಚಾರ್ಯ ನಿಶಧಿಗೆ ನಿಲ್ಲಿಸಿದಂತೆ ಇಲ್ಲಿಯ ಒಂದು ಶಾಸನ ಹೇಳಿದೆ. ಕೃಷ್ಣದೇವರಾಯನು ಈ ಸೀಮೆಗೆ ತಿಮ್ಮಪ್ಪಯ್ಯ ಎಂಬುವನನ್ನು ನಾಯಕನನ್ನಾಗಿ ನೇಮಿಸಿದ್ದಂತೆ ಇಲ್ಲಿಯ ಇನ್ನೊಂದು ಶಾಸನದಿಂದ ತಿಳಿಯುತ್ತದೆ. ರಾಮರಾಯನ ಮಗ ಶ್ರೀರಾಮರಾಜನ ಕಾಲದಲ್ಲಿಯೂ ಈ ನಾಡು 'ಕೊಪ್ಪಳ ಪ್ರದೇಶ'ವೆಂದು ಪ್ರಸಿದ್ಧಿ ಪಡೆದುದಾಗಿ ತಿಳಿದು ಬರುತ್ತದೆ.[5]

ವಿಜಾಪುರದ ಆದಿಲ್‌ಷಾನ ಕಾಲದಲ್ಲಿ ಈ ಸ್ಥಳವನ್ನು 'ಮುಜಫರ್‌ನಗರ' ಎಂದು ಕರೆಯುತ್ತಿದ್ದರು. ೨ನೆಯ

---

2 E.C., V, Bl. 124; Ibid. II., 124

3 Ibid., II, 384

4 Ibid., 345

5 M.A.R., 1917

ಇಬ್ರಾಹೀಂ ಆದಿಲ್‌ಷಾನ ಆಡಳಿತದಲ್ಲಿ, ಯಾಕೂಬ ನೆಂಬುವನು ಈ ಭಾಗದ ಅಧಿಕಾರಿಯಾಗಿದ್ದಾಗ, ಘಾಜಿ ಖಾನ್ ಎಂಬವನು ಇಲ್ಲಿ ಒಂದು ಮಸೀದಿ ಕಟ್ಟಿಸಿದನು. ಮುಂದೆ ಈ ಸ್ಥಳವು ೩ನೆಯ ಬಹುಲೋಲ ಎಂದು ಕರೆಯಲಾಗುತ್ತಿದ್ದ ಅಬ್ದುಲ್ ರಹೀಮನಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಅವನ ಪ್ರತಿನಿಧಿಯಾಗಿದ್ದ ಹುಸೇನ್ ಮೇಣ್‌ನನ್ನು ಶಿವಾಜಿ ಸೆರೆ ಹಿಡಿದು, ಕೊಪ್ಪಳ ಕೋಟೆ ಯನ್ನಿತ್ತರೆ ಅವನನ್ನು ಬಿಡುವುದಾಗಿ ತಿಳಿಸಿದನು. ಮುಂದೆ ಶಿವಾಜಿ ಇದನ್ನು ಸುಭಾನಜಿರಾವ್ ಎಂಬುವನಿಗೆ ಕೊಟ್ಟನು. ಈ ಪಟ್ಟಣದ ಮೂಲಕ ಮರಾಠರು ತಮ್ಮ ರಾಜ್ಯವನ್ನು ತುಂಗಭದ್ರಾ ನದಿಯ ದಂಡೆಯ ಆದರಾಚೆ, ಅಂದರೆ ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯವರೆಗೂ ಹಬ್ಬುವಂತೆ ಮಾಡಿದರು.

ತರುವಾಯ ಈ ಸ್ಥಳ ಹೈದರಾಲಿಯ ಕೈಸೇರಿತು. ಅವನು ಈ ನಾಡನ್ನು ಆಳಲು ಮಹ್ಮದ್ ಉಸ್ಮಾನ್ ಕೋವಾರ ಎಂಬುವನನ್ನು ನೇಮಿಸಿದನು. ಇವನು ಕೊಪ್ಪಳ ಕೋಟೆಯ ೨ನೆಯ ಬಾಗಿಲನ್ನೂ ಬಹದ್ದೂರ ಬಂಡೆಯ ಕೋಟೆಯನ್ನೂ ಕಟ್ಟಿಸಿದನು. ಮರಾಠ ರೊಂದಿಗೆ ಹೋರಾಡಿ ಈ ಸ್ಥಳವನ್ನು ವಶಪಡಿಸಿಕೊಂಡ ಸಂಕೇತವಾಗಿ ಟಿಪ್ಪೂಸುಲ್ತಾನ ಈ ಸ್ಥಳವನ್ನು 'ಸುಲ್ತಾನ ಗಡ' ಎಂದು ಕರೆದನು, ಕಿತ್ತೂರಿನ ಮಲ್ಲಸರ್ಜ ದೊರೆ ಯನ್ನು ಇಲ್ಲಿಯೇ ಬಂಧಿಸಿ ಇಟ್ಟಿದ್ದನು.*

ಕ್ರಿ.ಶ. ೧೭೯೧ರಲ್ಲಿ ಕರ್ನಲ್ ಕಿಡ್‌ನು ಸವಣೂರು. ಕೊಪ್ಪಳ, ಬೆಂಗಳೂರು ಮೊದಲಾದ ಪಟ್ಟಣಗಳನ್ನು ಹಿಡಿದುಕೊಂಡನು. ಕ್ರಿ.ಶ. ೧೮೫೦-೧೮೫೭ರ ಮಧ್ಯದಲ್ಲಿ ಇಲ್ಲಿಯ ವೀರಪ್ಪನೆಂಬ ಜಮೀನ್ದಾರ್ ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ಬಂಡೆದ್ದನು. ವೀರಪ್ಪನ ಬ್ರಿಟೀಷ್ ವಿರೋಧಿ ಪ್ರವೃತ್ತಿ ಮುಂದರಗಿ ಭೀಮರಾಯನಲ್ಲಿ ಮುಂದುವರಿಯಿತು. ಹಮ್ಮಿಗಿ ಕೆಂಚನಗೌಡ ಈತನಿಗೆ ಬೆಂಬಲವಾಗಿ ನಿಂತನು. ಕ್ರಿ.ಶ. ೧೮೫೮ರಲ್ಲಿ ಬ್ರಿಟೀಷರು ಈ ಬಂಡಾಯವನ್ನು ಬಗ್ಗುಬಡಿದರು. ೧೮೬೧ರಲ್ಲಿ ಈ ಭಾಗವನ್ನು ನವಾಬ ಸಾಲಾರಜಂಗ ಅವ್ವಲ್ ಅವರಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಭಾರತಕ್ಕೆ ಸ್ವಾತಂತ್ರ್ಯ ದೊರೆಯುವವರೆಗೂ ಈ ಪ್ರದೇಶ ಸಾಲಾರಜಂಗನ ಆಧಿಪತ್ಯದಲ್ಲಿಯೇ ಇದ್ದಿತು.

ಕ್ರಿ.ಶ. ೯೪೫ ರಿಂದ ೧೧೮೦ ರವರೆಗೆ ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿಯ ಕೆಲವು ಶಾಸನಗಳು ಶಿಲಾ ಹಾರ ವಂಶದ ಅರಸರನ್ನು 'ಕೊಪಣಪುರವರಾಧೀಶ್ವರ' ಎಂದು ಕರೆದಿವೆ (ತರ್ದವಾಡಿ ನಾಡು–ಶ್ರೀ ಆರ್. ಎಸ್. ಗುರವ). ಇದರಿಂದ ಈ ಸ್ಥಳ ಶಿಲಾಹಾರವಂಶದ ಅರಸರ ರಾಜಧಾನಿಯಾಗಿದ್ದಿತೆಂಬುದಾಗಲಿ ಅಥವಾ ಆ ವಂಶದ ಅರಸರು ಕೊಪ್ಪಳದ ಮೂಲದವರಾಗಿದ್ದರೆಂದಾಗಲಿ ಊಹಿಸಬಹುದಾದರೂ ಇದನ್ನು ಸಮರ್ಥಿಸುವ ಆಧಾರ ಗಳು ಈವರೆಗೆ ದೊರೆತಿಲ್ಲ; ಬೇರೆ ವಂಶದ ಹಲವು ಅರಸರೂ 'ಕೊಪಣಪುರವರಾಧೀಶ್ವರ' ಎಂಬ ಬಿರುದು ಧರಿಸಿದ್ದ ಬಗ್ಗೆ ಆಧಾರ ದೊರೆಯುತ್ತಿವೆ. ಉದಾಹರಣೆಗೆ, ಬೆಳಗಾವ ಜಿಲ್ಲೆಯ ಕಲ್ಲೋಳಿ ಶಾಸನವು ಯದುವಂಶದ ಮಹಾಮಂಡಳೇಶ್ವರ ೨ನೆಯ ರಾಜನನ್ನು 'ಕುಪಣಪುರ ವರಾಧೀಶ್ವರ' ಎಂದು ಕರೆದಿದೆ.

'ಚತುರಾಸ್ಯಕೋಟಿಕೂಟದೊಳತಿಶಯಮೆನಿಸಿರ್ದ'[6] ಈ ಕೊಪ್ಪಣತೀರ್ಥ ಪ್ರಾಚೀನಕಾಲದಿಂದ ಹಲವು ಹತ್ತು ಧರ್ಮಗಳ ನೆಲೆವೀಡಾಗಿದ್ದಿತು. 'ಕ್ಷುದ್ರ ಜನರೂ ಕೂಡಾ ತಮ್ಮ ಪರಾಕ್ರಮದಿಂದ ವಿಪುಲವಾದ ಸ್ವರ್ಗ ವನ್ನು ಪಡೆಯಬಹುದು' ಎಂಬುದನ್ನು ಸಾರುವ ಬೌದ್ಧ ಧರ್ಮದ ಪ್ರಥಮ ಪಾಠದಂತಿರುವ ಅಶೋಕನ ಶಾಸನಗಳು ಇಲ್ಲಿವೆ. ಆ ತರುವಾಯ ಈ ಸ್ಥಳ ಜೈನ ಧರ್ಮಕ್ಕೆ ಆಶ್ರಯವನ್ನಿತ್ತಿತು. ಶ್ರವಣಬೆಳಗೊಳದ ಶಾಸನಗಳು ಇದನ್ನು ಆದಿತೀರ್ಥ,[7] ಮಹಾತೀರ್ಥ[8] ಎಂದು ಬಣ್ಣಿಸಿವೆ. ರನ್ನನು ತನ್ನ ಆಶ್ರಯದಾತೆಯಾದ ಅತ್ತಿಮಬ್ಬೆಯನ್ನು 'ನೆಗಳ್ದ ಕೊಪಣಾಚಳದಂತೆ ಪವಿತ್ರ'

6 E. C., VII, Ch. 64
7 Ibid., 385
8 Ibid., 345
* ಈ ಮಾತು ನಿಜವಲ್ಲ; ಇದು ಕಬ್ಬಾಳದುರ್ಗ; ಮೈಸೂರಿಗೆ ಸಮೀಪ ಇದೆ (ಸಂ.)

ಎಂದು ಬಣ್ಣಿಸಿದ್ದಾನೆ. ಈ ಸ್ಥಳಕ್ಕೆ ತಪಕ್ಕೆಂದು, ಯಾತ್ರೆಗೆಂದು, ಮರಣಕ್ಕೆಂದು ಬಂದವರು ಹಲವು ಜನ. ಅವರಲ್ಲಿ ಕುಮಾರಸೇನಮುನಿ ಮುಳ್ಗುಂದದಲ್ಲಿ ತಪಗೈದು ತೃಪ್ತಿ ಹೊಂದದೆ, ಕೊಪಣಾಚಲಕ್ಕೆ ಬಂದು ಆಗಮೋಕ್ತ ವಿಧಿ ವಿಧಾನಗಳಿಂದ ಮುಕ್ತಿ ಸಾಧಿಸಿದನೆಂದು ಚಾಮುಂಡ ರಾಯ ಪುರಾಣ ಹೇಳಿದೆ. 'ತ್ರೈಲೋಕ್ಯ ರಕ್ಷಾಮಣಿ ಸ್ತೋತ್ರ' ಎಂಬ ಹಸ್ತಪ್ರತಿಯು ಈ ಸ್ಥಳವನ್ನು 'ವಿಪುಲ ಶ್ರೀಕೊಪಣಾದಿತೀರ್ಥ' ಎಂದಿದೆ.[9] ಇಲ್ಲಿ ೭೭೦ ಜಿನಾಲಯಗಳಿದ್ದವೆಂದು ಒಂದು ಶಾಸನ ಬಣ್ಣಿಸಿದೆ. ಅಲ್ಲದೆ ಇದು ೧೩ನೆಯ ಶತಮಾನದಲ್ಲಿ ಜೈನ ಕೇಂದ್ರ ವಾಗಿದ್ದಿತು ಎಂಬುದು ಹರಿಹರ, ರಾಘವಾಂಕರ-ಅದಯ್ಯನ ರಗಳೆ, ಸೋಮನಾಥಚಾರಿತ್ರ್ಯಗಳಿಂದ ತಿಳಿದು ಬರುತ್ತದೆ. ಇಲ್ಲಿ ೨೪ ಮುನಿಸಂಘಗಳಿದ್ದವೆಂದೂ ಅವು ಗಳಿಗೆ ಹುಳ್ಳ ದಾನವಿತ್ತನೆಂದೂ ಶ್ರವಣಬೆಳಗೊಳದ ಒಂದು ಶಾಸನ ಬಣ್ಣಿಸಿದೆ. ನಯಸೇನನ ಧರ್ಮಾಮೃತ (ಸಂ. ೯. ಪ್ರ. ೧೮೨ರ ಅ. ಟಿ.)ದಲ್ಲಿ ಶ್ರೀಕೊಪಣ ದೊಳ್ಳಿಂದ ಶಶಿನಾಥ ಜಿನನನ್ನು ನೆನೆಯಲಾಗಿದೆ. ಕ್ರಿ.ಶ. ೧೫೫೭ರ ಕೆಳದಿ ಸದಾಶಿವನಾಯಕನ ಒಂದು ಶಾಸನದಲ್ಲಿ 'ಕೊಪಣದ ಚಂದ್ರನಾಥ'ನ ಉಲ್ಲೇಖ ಬಂದಿದೆ. ಇವು ಗಳಿಂದ ಕ್ರಿ.ಶ. ಸು. ೩ನೆಯ ಶತಮಾನದಿಂದ ಕ್ರಿ.ಶ. ೧೫೭೦ರವರೆಗೆ ಈ ಸ್ಥಳ ಜೈನ ಕೇಂದ್ರವಾಗಿದ್ದುದು ಸ್ಪಷ್ಟ ವಾಗುತ್ತದೆ. ಇಲ್ಲಿ ಉಲ್ಲೇಖಗೊಂಡ 'ಕೊಪಣಾಚಲ' ಇಂದು ಗವಿಮಠವಿರುವ ಬೆಟ್ಟವೇ ಆಗಿರಬೇಕು. ಏಕೆಂದರೆ ಅಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಹಲವು ಶಾಸನ ದೊರೆಯುತ್ತವೆ. ಜೈನಧರ್ಮ ಇಲ್ಲಿ ಇಷ್ಟು ಮಹತಿ ಪಡೆ ದಿದ್ದರೂ ಕರ್ನಾಟಕದ ಇನ್ನೊಂದು ಪ್ರಸಿದ್ಧ ಜೈನಕ್ಷೇತ್ರ ಶ್ರವಣಬೆಳ್ಗೊಳ ಉಳಿಸಿಕೊಂಡು ಬಂದ ಪ್ರಸಿದ್ಧಿಯನ್ನು ಈ ಸ್ಥಳ ಏಕೆ ಉಳಿಸಿಕೊಂಡು ಬರಲಿಲ್ಲ ಎಂಬ ಪ್ರಶ್ನೆ ಏಳುತ್ತದೆ. ಆ ಪ್ರಶ್ನೆಗೆ ಈ ಸ್ಥಳ ಆಗಾಗ ರಾಜಕೀಯ ಮತ್ತು ಅನ್ಯ ಮತಗಳ ಪ್ರಭಾವಕ್ಕೆ ತುತ್ತಾದುದೇ ಕಾರಣ ವೆಂದು ಹೇಳಬಹುದಾಗಿದೆ.

'ಬಸವಾದಿ ಪ್ರಮಥರ ಪೂರ್ವದಲ್ಲಿ ವೀರಶೈವದ ಸ್ಥಿತಿ ಗತಿ ಹೇಗಿತ್ತೆಂಬುದನ್ನು ಅರಿತುಕೊಳ್ಳಲು ಹರದನಹಳ್ಳಿ, ಹೂಲಿ, ಪುಲಿಗೆರೆ, ಕೊಪಣನಗರ, ಸುತ್ತೂರು ಮೊದಲಾದ ಮಠಗಳಲ್ಲಿ ಕ್ರಿ.ಶ. ೧೦೦೦ದ ಸುಮಾರಿನಲ್ಲಿ ಪ್ರತಿಷ್ಠಾಪಿತ ವಾದ ದೇವಾಲಯಗಳ, ಅಲ್ಲಿ ನೆಲೆಗೊಳಿಸಲ್ಪಟ್ಟ ಸಮಯಾಚಾರಿ ಸುವಾಸಿಗಳ ಚರಿತ್ರೆ ನಮಗೆ ಸಹಾಯಕ ವಾಗಿದೆ' ಎಂಬುದು ಡಾ|| ಆರ್. ಸಿ. ಹಿರೇಮಠ ಅವರ ಅಭಿಪ್ರಾಯ.[10] ಇಲ್ಲಿಯ ಗವಿಮಠದಲ್ಲಿ ದೊರೆತಿರುವ ಹೊಳೆಯ ಮಂಮಯ್ಯನ ಶಾಸನ (ಕ್ರಿ.ಶ. ೧೦೮೬) ಈ ನಾಡಿನ ವೀರಶೈವಧರ್ಮದ ಪ್ರಪ್ರಥಮ ಉಲ್ಲೇಖ. ಅಲ್ಲಿಂದ ಇಲ್ಲಿಯವರೆಗೆ ಈ ಮಠ ವೀರಶೈವಧರ್ಮ, ಸಂಸ್ಕೃತಿಯ ಸಂಗಮವಾಗಿ ನಿಂತಿದೆ. ಆದರೆ ಪೂರ್ವದಲ್ಲಿ ಈ ಮಠ ಜೈನಧರ್ಮದ ಕೇಂದ್ರವಾಗಿದ್ದ ಬಗೆಗೆ ಅವಶೇಷಗಳು ದೊರೆಯುತ್ತವೆ.

ವಿಜಯನಗರದರಸು ಕೃಷ್ಣದೇವರಾಯನನ್ನು ಉಲ್ಲೇ ಖಿಸುವ ಶಾಸನವೊಂದು ವೆಂಕಟೇಶ್ವರ ದೇವಾಲಯ ದಲ್ಲಿದ್ದು ವೈಷ್ಣವಧರ್ಮದ ಅಸ್ತಿತ್ವವನ್ನು ಸಾರುತ್ತಿದೆ. ಬಿಜಾಪುರದ ಬಾದಷಾ, ಹೈದರಾಲಿ, ಟಿಪ್ಪು, ನೈಜಾಂ ಮೊದಲಾದ ಮುಸ್ಲಿಂ ಧರ್ಮಾಭಿಮಾನಿ ಅರಸರಿಂದ ಇಲ್ಲಿ ಮುಸ್ಲಿಂ ಸಂಸ್ಕೃತಿಯೂ ಬೆಳೆದು ಬಂದಿದೆ. ವಿಶ್ವಕರ್ಮ ಸಮಾಜದ ಶ್ರೀಶೈಲಸ್ವಾಮಿಮಠವೂ ಇಲ್ಲಿ ಪ್ರಸಿದ್ಧ ವಾಗಿದೆ. ಹೀಗೆ ಈ ನಾಡಿನಲ್ಲಿ ಕ್ರಿ.ಪೂ. ೩ನೆಯ ಶತ ಮಾನದಿಂದ ಬೌದ್ಧ, ಜೈನಧರ್ಮಗಳು, ಕ್ರಿ.ಶ. ೧೦ನೆಯ ಶತಮಾನದಿಂದ ಶೈವ, ವೀರಶೈವಧರ್ಮಗಳು ಪರಸ್ಪರ ಆತ್ಮೀಯ ಭಾವದಿಂದ ಬೆಳೆದು ಬಾಳುತ್ತ ಬಂದಿರು ವದು ಸ್ಪಷ್ಟವಾಗುತ್ತದೆ.

ಶಿಲ್ಪಕಲೆಯ ದೃಷ್ಟಿಯಿಂದಲೂ ಕೊಪ್ಪಳ ಮಹತ್ವದ ಕೊಡುಗೆಯನ್ನಿತ್ತಿದೆ. ಜನಸಾಮಾನ್ಯರು ಈ ನಾಡನ್ನು 'ಊರಾಗ ೭೭೨ ಬಸ್ತಿ, ಬಾಚೀನಕಲ್ಲ ಮೇಲೊಂದು ಕಿಸ್ತಿ' ಎಂದಾಡಿಕೊಳ್ಳುತ್ತಿದ್ದ ಮಾತಿನಿಂದ ಇದು ಜಿನಾಲಯಗಳ ಬೀಡಾಗಿದ್ದಿತು ಎಂಬುದು ಸ್ಪಷ್ಟವಾಗು ತ್ತದೆ. ಇಂದು ಇವುಗಳ ಕಲ್ಪನೆ ಕೇವಲ ಊಹೆ ಮಾತ್ರ. ಜೈನ ಮಂದಿರಗಳು, ಮೂರ್ತಿಗಳು ಮೊದಲಾದವು ಇಲ್ಲಿಯ ಕೋಟೆ ಕೊತ್ತಲವನ್ನು ಕಟ್ಟಲು ಉಪಯೋಗ

9 ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂ. ೨, ಪು. ೧೫೭

10 ಷಟ್ಸ್ಥಲಜ್ಞಾನ ಸಾರಾಮೃತ, ಪ್ರಸ್ತಾವನೆ, ಪು. ೩೫

ವಾಗಿರುವುದನ್ನು ನೋಡಬಹುದಾಗಿದೆ. ಗಂಗರಾಜ ಏಚಿರಾಜರ ಆದರ್ಶನಗರನಿರ್ಮಾಣಕ್ಕೆ ಇದು ಮಾರ್ಗ ದರ್ಶಿಯಾಗಿದ್ದಿತು ಎಂಬುದನ್ನು ಈಗಾಗಲೆ ನೋಡಿದೆ. ಇಲ್ಲಿಯ ಶ್ರವಣಬೆಳ್ಗೊಳದ ಹಾಗೆ ಇಂದ್ರಗಿರಿ, ಚಂದ್ರಗಿರಿ ಗಳಿದ್ದವು. ೧೧-೧೨ನೆಯ ಶತಮಾನದ ತರುವಾಯ ಇಲ್ಲಿ ಶಿವಾಲಯಗಳು ನಿರ್ಮಾಣಗೊಂಡವು. ಅವು ಗಳಲ್ಲಿ ಗವಿಮಠ, ಮಳಲಮಲ್ಲೇಶ್ವರ ಮೊದಲಾದುವು ಪ್ರಮುಖವಾದವು. ಕರ್ನಾಟಕದ ಶಿಲ್ಪಕಲಾವೈಭವದ ಅತ್ಯುನ್ನತಿಯನ್ನು ಸಾರುತ್ತಿರುವ, 'ದೇವಾಲಯದ ಚಕ್ರವರ್ತಿ'ಯೆಂದು ಬಣ್ಣಿಸಲ್ಪಟ್ಟಿರುವ ಇಟ್ಟಗಿಯ ಮಹಾದೇವಮಂದಿರ ಕೊಪ್ಪಳಕ್ಕೆ ೨೦ ಮೈಲು ಅಂತರ ದಲ್ಲಿದೆ. ಮೈಸೂರಿನ ಹಳೇಬೀಡನ್ನು ಬಿಟ್ಟರೆ ಕನ್ನಡ ನಾಡಿನಲ್ಲಿ ಇದೇ ಸುಂದರವಾದ ದೇವಾಲಯವೆಂದು ಕಸಿನ್ಸ್ ಅವರ ಅಭಿಪ್ರಾಯ. ಅದೇ ರೀತಿ ನವಲಿಂಗ ಗಳಿಂದಲೂ ಒಂಬತ್ತು ಶಕ್ತಿಪೀಠಗಳಿಂದಲೂ ಕೂಡಿ 'ಶಿವಶಕ್ತಿ ಸುರತ್ ಸಂಪುಟಕ್ಷೇತ್ರ'ವೆಂದು ಬಣ್ಣಿಸಲ್ಪಟ್ಟ ಕುಕನೂರೂ ಹಲವು ಹತ್ತು ದೇವಾಲಯಗಳನ್ನೊಳ ಗೊಂಡು ಕೊಪ್ಪಳಕ್ಕೆ ಸಮೀಪದಲ್ಲಿದೆ. ಅದೇ ರೀತಿ ವೈಷ್ಣವ, ಮುಸ್ಲಿಂ ಕಲಾಕೃತಿಗಳೂ ಇಲ್ಲಿ ದೊರೆಯುತ್ತವೆ. ನೈಸರ್ಗಿಕವಾಗಿ ಬಲಾಢ್ಯವಾಗಿರುವ ಇಲ್ಲಿಯ ಕೋಟೆ ಯನ್ನು ಸರ್ ಜಾನ್ ಮಾಲ್ಕ್ಯಂ ಎಂಬ ಬ್ರಿಟೀಷ್ ಜನರಲ್‌ನು ತಾನು ನೋಡಿದ ಕೋಟೆಗಳಲ್ಲಿ 'ಯಾವ ಕುಂದೂ ಇಲ್ಲದ ಅತ್ಯಂತ ಬಲಾಢ್ಯವಾದ ಕೋಟೆ' ಎಂದು ಬಣ್ಣಿಸಿದ್ದಾನೆ. ಇದು ಚಾಲುಕ್ಯರ ಕಾಲದಲ್ಲಿ ನಿರ್ಮಿಸ ಲ್ಪಟ್ಟು ಹಂತ ಹಂತವಾಗಿ ಬೆಳೆದು ಬಂದಿರಬೇಕು ಎಂದು ಪಂಡಿತರ ಅಭಿಪ್ರಾಯ.

ಹೀಗೆ ಪ್ರಾಚೀನಕಾಲದಿಂದ ಬೇರೆ ಬೇರೆ ಧರ್ಮಗಳ ನೆಲೆವೀಡಾಗಿ, ರಾಜಕೀಯ, ಸಾಂಸ್ಕೃತಿಕ ಚಟುವಟಿಕೆಗಳ ಆಡುಂಬೊಲವಾಗಿ ನಿಂತ ಈ ಸ್ಥಳ ಕನ್ನಡನಾಡಿನ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದೆಯೆಂದು ಹೇಳ ಬಹುದು.

## ಆಧಾರ


೧. ಡಾ॥ ಪಿ. ಬಿ. ದೇಸಾಯಿ : ಶಾಸನ ಪರಿಚಯ

೨. Dr. P. B. Desai : Jainism in South India

೩. ಗವಿದೀಪ್ತಿ (ಕೊಪ್ಪಳ ಶ್ರೀಮಠದ ಪ್ರಕಟಣೆ)

೪. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೨೨-೩